# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 664
ಸದಸ್ಯರ ಹೆಸರು : ಶ್ರೀ ಎಲ್.ಎಲ್.ಭೋಜೇಗೌಡ(ಶಿಕ್ಷಕರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 24-09-2020
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ದೂರದರ್ಶನದಲ್ಲಿ ಮಕ್ಕಳ ಕಲಿಕೆಗೆ ಸಂಬಂಧಪಟ್ಟಂತೆ ಸರ್ಕಾರ ತೆಗೆದುಕೊಂಡ ನಿಲುವೇನು; | ಕೋವಿಡ್-19ರ ಹಿನ್ನೆಲ್ಲೆಯಲ್ಲಿ 2020-21ನೇ ಸಾಲಿನ ಶಾಲಾ-ಕಾಲೇಜು ತರಗತಿಗಳು ಆರಂಭವಾಗದೇ ವಿದ್ಯಾರ್ಥಿಗಳು ಕಲಿಕೆಗೆ ದೂರಾಗುವ ಪರಿಸ್ಥಿತಿ ಎದುರಾಯಿತು. ಆದರೆ ವಿದ್ಯಾರ್ಥಿಗಳ ನಿರಂತರ ಕಲಿಕೆಗೆ ಒತ್ತು ನೀಡಿ ಇಲಾಖೆಯು ದಿನಾಂಕ:20.07.2020ರಿಂದ ದೂರದರ್ಶನ ಚಂದನ ವಾಹಿನಿಯಲ್ಲಿ 8, 9 ಮತ್ತು 10ನೇ ತರಗತಿಗಳ ವೀಡಿಯೋ ಪಾಠಗಳನ್ನು (ಕನ್ನಡ ಮಾಧ್ಯಮದಲ್ಲಿ) **'ಸಂವೇದ'** ಎಂಬ ಹೆಸರಿನಲ್ಲಿ ಪ್ರಸಾರ ಮಾಡುವ ನಿಲುವನ್ನು ತಳೆಯಲಾಯಿತು ಹಾಗೂ ಸದರಿ ಕಾರ್ಯಕ್ರಮವನ್ನು ಯಶಸ್ವಿಯಾಗಿ ಅನುಷ್ಠಾನಕ್ಕೆ ತರಲಾಗಿದೆ. |
| ಆ) | ವಿಶೇಷವಾಗಿ ಕೆಲವು ಶಾಲಾ ತರಗತಿಗಳನ್ನು ದೂರದರ್ಶನದಲ್ಲಿ ನಡೆಸುವ ಕುರಿತು ಸರ್ಕಾರದ ಚಿಂತನೆಗಳೇನು; | • ವಿದ್ಯಾರ್ಥಿಗಳನ್ನು ನಿರಂತರವಾಗಿ ಕಲಿಕೆಯಲ್ಲಿ ತೊಡಗಿಸುವ ಆಶಯದಿಂದ ದೂರದರ್ಶನ ಪಾಠಗಳನ್ನು ಬಿತ್ತರಿಸಲಾಗುತ್ತಿದೆ.<br>• ದೂರದರ್ಶನ ತರಗತಿಗಳ ಮೂಲಕ ವಿದ್ಯಾರ್ಥಿಗಳು ಅವರ ಮನೆಗಳಲ್ಲಿಯೇ ಕಲಿಯಲು ಅವಕಾಶ ಒದಗಿಸಿದಂತ್ತಾಗುತ್ತದೆ.<br>• ನೋಡಿಕಲಿ, ಆಲಿಸಿಕಲಿ, ಸ್ವಯಂ ಕಲಿ, ಚಟುವಟಿಕೆಯೊಂದಿಗೆ ಕಲಿ ಎಂಬ ಕಲಿಕಾ ನಿಯಮಗಳನ್ವಯ ವಿದ್ಯಾರ್ಥಿಗಳಿಗೆ ಕಲಿಕಾ ಅನುಭವಗಳನ್ನು ಒದಗಿಸುವ ಉದ್ದೇಶದೊಂದಿಗೆ ದೂರದರ್ಶನ ಪಾಠಗಳನ್ನು ಬಿತ್ತರಿಸುವ ನಿರ್ಧಾರವನ್ನು ಇಲಾಖೆಯು ಕೈಗೊಂಡಿದೆ.<br>• ಎಂತಹ ಸಂಧರ್ಭದಲ್ಲಿಯೂ ವಿದ್ಯಾರ್ಥಿಗಳು ಕಲಿಕಾ ಪ್ರಕ್ರಿಯೆಯಿಂದ ದೂರವಾಗದಂತೆ ಕ್ರಮವಹಿಸಲು ಇಲಾಖೆಯು ದೂರದರ್ಶನ ಪಾಠಗಳನ್ನು ಒಂದು ಉಪಕ್ರಮವಾಗಿ ಜಾರಿಗೊಳಿಸಿದೆ. |
| ಇ) | ಹಾಗಿದ್ದಲ್ಲಿ, ಯಾವಾಗಿನಿಂದ ಈ ಯೋಜನೆಯನ್ನು ಆರಂಭಿಸುವ ಚಿಂತನೆ ಸರ್ಕಾರಕ್ಕಿದೆ ಮತ್ತು ಯಾವ ರೀತಿಯಲ್ಲಿ ಕಾರ್ಯರೂಪಕ್ಕೆ ತರಲಾಗುವುದು? | ▪ ದೂರದರ್ಶನ ಚಂದನವಾಹಿನಿಯಲ್ಲಿ ದಿನಾಂಕ:20.07.2020 ರಿಂದ ಪ್ರೌಢಶಾಲಾ ಹಂತದ ಸೇತುಬಂಧ ಪಾಠಗಳನ್ನು ನಿರಂತರವಾಗಿ ಒಂದು ತಿಂಗಳ ಕಾಲ ಪ್ರಸಾರಗೊಳಿಸಲಾಗಿದೆ.<br>▪ ದಿನಾಂಕ:17.08.2020ರಿಂದ ಪ್ರೌಢಶಾಲಾ ಹಂತದ ತರಗತಿಗಳ ಪಠ್ಯಾಂಶಗಳಿಗೆ ಸಂಬಂಧಿಸಿದ ವೀಡಿಯೋ ಪಾಠಗಳನ್ನು ಪ್ರಸಾರಗೊಳಿಸಲಾಗುತ್ತಿದೆ. |

| | | |
|---|---|---|
| | | **ಸಂವೇದ:-** ಇದು ದೂರದರ್ಶನ ಚಂದನ ವಾಹಿನಿಯಲ್ಲಿ ಬಿತ್ತರಗೊಳ್ಳುತ್ತಿರುವ ಬೋಧನಾ-ಕಲಿಕಾ ತರಗತಿ ಯೋಜನೆಯಾಗಿದೆ. ಸರ್ಕಾರವು ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ(DSERT), ಬೆಂಗಳೂರು ಹಾಗೂ ದೂರದರ್ಶನ ಚಂದನ ವಾಹಿನಿಯ ಸಹಯೋಗದಲ್ಲಿ ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲಾಗಿದೆ. ಇಲ್ಲಿ ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆಯು ಶಾಲಾ ಪಠ್ಯವಸ್ತುವಿಗೆ ಅನುಗುಣವಾಗಿ ಆಯ್ದ ಪರಿಣಿತ ಹಾಗೂ ಆಸಕ್ತಿದಾಯಕ ಶಿಕ್ಷಕರ ತಂಡಗಳನ್ನು ವಿಷಯವಾರು ರಚಿಸಿದೆ. ಅವರುಗಳ ಮೂಲ ವಿವಿಧ ತರಗತಿಗಳ ಪಠ್ಯವಸ್ತುವಿನ ಆಧಾರದಲ್ಲಿ ದೂರದರ್ಶನ ತರಗತಿಗಳನ್ನು ಚಿತ್ರೀಕರಿಸಿ ದೂರದರ್ಶನ ಚಂದನ ವಾಹಿನಿಯಲ್ಲಿ ಪಾಠಗಳನ್ನು ಬಿತ್ತರಿಸಲಾಗುತ್ತಿದೆ.<br>• 6ರಿಂದ 10ನೇ ತರಗತಿಗಳ ಪಠ್ಯ ವಿಷಯಕ್ಕೆ ಸಂಬಂಧಿಸಿದ ಇ-ಪಾಠಗಳನ್ನು **'ಮಕ್ಕಳವಾಣಿ Youtube'** ಚಾನಲ್‌ನಲ್ಲಿ ಲಭ್ಯವಾಗುವಂತೆ ಕ್ರಮವಹಿಸಿದೆ.<br>• ಸಂವೇದ ಯೋಜನೆಯಡಿ ಬಿತ್ತರವಾದ ಎಲ್ಲಾ ಇ-ಪಾಠಗಳನ್ನು **DSERTಯ Youtube** ಚಾನಲ್‌ನಲ್ಲಿ ಸಹ ಲಭ್ಯವಾಗುವಂತೆ ಕ್ರಮವಹಿಸಿದೆ.<br>• 8ರಿಂದ 10ನೇ ತರಗತಿಯ ಸಮಾಜ ವಿಜ್ಞಾನ ಆಂಗ್ಲ ಮಾಧ್ಯಮ ಪಾಠಗಳನ್ನು **DSERTಯ Youtube** ಚಾನಲ್‌ನಲ್ಲಿ ಸಹ ಲಭ್ಯವಾಗುವಂತೆ ಕ್ರಮವಹಿಸಿದೆ.<br>• **NCERT** ಯಿಂದ ರೂಪಿತವಾದ 8ರಿಂದ 10ನೇ ತರಗತಿಗಳ ವಿಜ್ಞಾನ ಮತ್ತು ಗಣಿತ ವಿಷಯಗಳ ಆಂಗ್ಲ ಮಾಧ್ಯಮ ಇ-ಪಾಠಗಳು **DIKSHA** ವೆಬ್‌ಸೈಟ್ ಮತ್ತು ಪೋರ್ಟ್‌ಗಳಲ್ಲಿ ಲಭ್ಯವಿದ್ದು, ಈ ಬಗ್ಗೆ ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ (DSERT) ಇಲಾಖೆಯು ವ್ಯಾಪಕ ಪ್ರಚಾರ ನೀಡಿದೆ.<br>ಇಂದಿನವರೆಗೂ ಸುಮಾರು **ಎಂಟು ಸಾವಿರ(8000)** ಇ-ಸಂಪನ್ಮೂಲಗಳು **ಮಕ್ಕಳವಾಣಿ Youtube** ಚಾನಲ್ ಮತ್ತು **DSERT Youtube** ಚಾನಲ್‌ನಲ್ಲಿ ಲಭ್ಯವಿರುತ್ತವೆ. |

ಸಂಖ್ಯೆ: ಇಪಿ 126 ಎಂ.ಹೆಚ್.ಟಿ 2020

S. [signature]

**ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು**